ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ : 26ನೇ ಜುಲೈ, 2019

"ಹೊಸ ಕೊಳಗೇರಿ ನೀತಿ" ಯೋಜನೆ

ಶ್ರೀ ಇಕ್ಬಾಲ್ ಅಹ್ಮದ್ ಸರಡಗಿ (ನಾಮನಿರ್ದೇಶನ ಹೊಂದಿದವರು):-

648 (732) ಮಾನ್ಯ ವಸತಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) "ಹೊಸ ಕೊಳಗೇರಿ ನೀತಿ ಯೋಜನೆ"ಯನ್ನು ಯಾವಾಗ ಜಾರಿಗೆ ತರಲಾಯಿತು ; ಈ ಯೋಜನೆಯ ರೂಪುರೇಷೆಗಳೇನು ; (ಸಂಪೂರ್ಣ ಮಾಹಿತಿ ನೀಡುವುದು)

(ಆ) ಈ ಯೋಜನೆಯು ಜಾರಿಯಾದಾಗಿನಿಂದ ಇದುವರೆವಿಗೂ ಮೀಸಲಿಟ್ಟ ಅನುದಾನವೆಷ್ಟು ; ಹಾಗೂ ಖರ್ಚು ಮಾಡಲಾದ ಅನುದಾನವೆಷ್ಟು ; (ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

(ಇ) ಈ ಯೋಜನೆಯನ್ವಯ ರಾಜ್ಯದಲ್ಲಿ ಕೊಳಗೇರಿ ಪ್ರದೇಶಗಳ ಸಮೀಕ್ಷೆಯನ್ನು ನಡೆಸಲಾಗಿದೆಯೇ ; ಹಾಗಿದ್ದಲ್ಲಿ, ಸಮೀಕ್ಷೆಯ ಪ್ರತಿ ನೀಡುವುದು ;

(ಈ) ರಾಜ್ಯದ ತಾಲ್ಲೂಕು ಕೊಳಗೇರಿ ಪ್ರದೇಶಗಳವಾರು ಅನುದಾನದ ಹಂಚಿಕೆಯಲ್ಲಿ ತಾರತಮ್ಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ, ಈ ತಾರತಮ್ಯವನ್ನು ಸರಿಪಡಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು ? (ಮಾಹಿತಿ ನೀಡುವುದು)